## ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 917 |
| ಮಾನ್ಯ ಸದಸ್ಯರ ಹೆಸರು | ಶ್ರೀ ಯು.ಬಿ ವೆಂಕಟೇಶ್<br>(ನಾಮ ನಿರ್ದೇಶನ ಹೊಂದಿದವರು |
| ಉತ್ತರಿಸಬೇಕಾದ ದಿನಾಂಕ | 20-09-2021 |
| ಉತ್ತರಿಸಬೇಕಾದ ಸಚಿವರು | ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ<br>ವೈದ್ಯಕೀಯ ಶಿಕ್ಷಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೋವಿಡ್-19 ಪ್ರಕರಣ ಮತ್ತು ಅದರ ಸಂಬಂಧಿತ ಸಮಸ್ಯೆಗಳ ದೃಷ್ಟಿಯಿಂದ ರಾಜ್ಯದ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಆಸ್ಪತ್ರೆಗಳು/ ಆರೈಕೆ ಕೇಂದ್ರಗಳನ್ನು ಆರಂಭಿಸುವ ಕುರಿತು ಸರ್ಕಾರಕ್ಕೆ ಯೋಚನೆ ಇದೆಯೇ; | ಇದೆ. |
| ಆ) | ಯೋಚನೆ ಇದ್ದಲ್ಲಿ, ಇದಕ್ಕಾಗಿ ಜಿಲ್ಲಾವಾರು ಒದಗಿಸಿದ ಹಣ ಮತ್ತು ಇತರೆ ಸುಧಾರಣಾ ಕ್ರಮಗಳ ವಿವರಗಳೇನು? | **ಸುಧಾರಣಾ ಕ್ರಮಗಳ ವಿವರ :**<br><br>ಕೋವಿಡ್-19ರ ಪ್ರಾರಂಭದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಡಿಯಲ್ಲಿ 587 ಆಕ್ಸಿಜನ್ ಬೆಡ್‌ಗಳು, 312 ವೆಂಟಿಲೇಟರ್ ಸಹಿತ ಐ.ಸಿ.ಯು ಬೆಡ್‌ಗಳು ಲಭ್ಯವಿದ್ದು, ತದನಂತರ ಹಂತ ಹಂತವಾಗಿ ಮೂಲ ಸೌಕರ್ಯ, ಲ್ಯಾಬ್ ಟೆಸ್ಟಿಂಗ್ ಸಾಮರ್ಥ್ಯ, ಆಕ್ಸಿಜನ್ ಸಿಲಿಂಡರ್‌ಗಳ ಲಭ್ಯತೆ, ಆಕ್ಸಿಜನ್ ಕಾನ್ಸಂಟ್ರೇಟರ್‌ಗಳನ್ನು ಹಾಗೂ ಉಪಕರಣಗಳನ್ನು ಮತ್ತು ಹೆಚ್ಚುವರಿ ಮಾನವ ಸಂಪನ್ಮೂಲ ವ್ಯವಸ್ಥೆಯನ್ನು ಕಲ್ಪಿಸಿ ಸರ್ಕಾರಿ ಆಸ್ಪತ್ರೆಗಳಲ್ಲಿನ ಸೌಲಭ್ಯವನ್ನು ಮೇಲ್ದರ್ಜೆಗೇರಿಸಲಾಗಿದೆ.<br><br>ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆಯಡಿ ಬರುವ ಆಸ್ಪತ್ರೆಗಳಲ್ಲಿ ಪ್ರಸ್ತುತ ಒಟ್ಟು 31,611 ಹಾಸಿಗೆಗಳ ಸಾಮರ್ಥ್ಯ ಲಭ್ಯವಿದ್ದು, ಇದರ ಪೈಕಿ 12,177 ಸಾಮಾನ್ಯ ಹಾಸಿಗೆಗಳು, 17,101 ಆಕ್ಸಿಜನೇಟೆಡ್ ಹಾಸಿಗೆಗಳು ಹಾಗೂ 2,333 ಐ.ಸಿ.ಯು ಹಾಸಿಗೆಗಳು (1,792 ವೆಂಟಿಲೇಟೆಡ್ ಹಾಸಿಗೆಗಳ ಸಹಿತ) ಇರುತ್ತವೆ (ದಿನಾಂಕ:01.09.2021 ರಂತೆ).<br><br>ಇದರೊಂದಿಗೆ ರಾಜ್ಯದಲ್ಲಿ ಕೋವಿಡ್ ಸೋಂಕು ಹೆಚ್ಚು ಇದ್ದ ಸಂದರ್ಭದಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳ, ಖಾಸಗಿ ವೈದ್ಯಕೀಯ ಕಾಲೇಜುಗಳ, ಖಾಸಗಿ ಆಸ್ಪತ್ರೆಗಳ (ಶೇಕಡ 50ರಷ್ಟು) ಹಾಸಿಗೆಗಳನ್ನು ಕೋವಿಡ್-19 ನಿಯಂತ್ರಣಕ್ಕಾಗಿ ಬಳಸಿಕೊಳ್ಳಲಾಗಿರುತ್ತದೆ.<br><br>ಸಂಭಾವಿತ ಕೋವಿಡ್-19 3ನೇ ಅಲೆಯ ನಿರ್ವಹಣೆಗಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>• ಜಿಲ್ಲಾ ಹಾಗೂ ತಾಲ್ಲೂಕು ಆಸ್ಪತ್ರೆಗಳಲ್ಲಿ ಹೆಚ್ಚುವರಿಯಾಗಿ 8,300 ಹಾಸಿಗೆಗಳಿಗೆ ಮೆಡಿಕಲ್‌ಗ್ಯಾಸ್ ಪೈಪ್‌ಲೈನ್ ಒದಗಿಸುವುದು. |

| | | |
|---|---|---|
| | | • 19 ಜಿಲ್ಲಾಸ್ಪತ್ರೆಗಳಲ್ಲಿ ಹೆಚ್ಚುವರಿಯಾಗಿ 25 ಐಸಿಯು/ಹೆಚ್.ಡಿ.ಯು ವಾರ್ಡ್‌ಗಳನ್ನು ಹಾಗೂ 146 ತಾಲ್ಲೂಕು ಆಸ್ಪತ್ರೆಗಳಲ್ಲಿ ಹೆಚ್ಚುವರಿಯಾಗಿ 19 ಐಸಿಯು/ಹೆಚ್.ಡಿ.ಯು ವಾರ್ಡ್‌ಗಳನ್ನು ಸ್ಥಾಪಿಸುವುದು.<br>• ಜಿಲ್ಲಾಸ್ಪತ್ರೆಗಳಿಗೆ ಕನಿಷ್ಟ 1000 ಎಲ್.ಪಿ.ಎಂ ಸಾಮರ್ಥ್ಯದ ಆಕ್ಸಿಜನ್ ಜನರೇಷನ್ ಪ್ಲಾಂಟ್ ಹಾಗೂ 390 ರಿಂದ 500 ಎಲ್.ಪಿ.ಎಂ ಸಾಮರ್ಥ್ಯದ ಆಕ್ಸಿಜನ್ ಜನರೇಷನ್ ಪ್ಲಾಂಟ್‌ಗಳನ್ನು ತಾಲ್ಲೂಕು ಆಸ್ಪತ್ರೆಗಳಿಗೆ ಒದಗಿಸುವುದು.<br>• ಜಿಲ್ಲಾಸ್ಪತ್ರೆಗಳಿಗೆ ಹೆಚ್ಚುವರಿಯಾಗಿ 13 ಕಿಲೋ ಲೀಟರ್ ಸಾಮರ್ಥ್ಯದ ಲಿಕ್ವಿಡ್‌ಆಕ್ಸಿಜನ್ ಪ್ಲಾಂಟ್‌ಗಳನ್ನು ಮತ್ತು ತಾಲ್ಲೂಕು ಆಸ್ಪತ್ರೆಗಳಿಗೆ 6 ಕಿಲೋ ಲೀಟರ್ ಸಾಮರ್ಥ್ಯದ ಲಿಕ್ವಿಡ್‌ಆಕ್ಸಿಜನ್ ಪ್ಲಾಂಟ್‌ಗಳನ್ನು ಒದಗಿಸುವುದು.<br>• ಹೆಚ್ಚುವರಿ ಹಾಸಿಗೆ ಸಾಮರ್ಥ್ಯಕ್ಕೆ ಅನುಗುಣವಾಗಿ ಯಂತ್ರೋಪಕರಣಗಳು ಹಾಗೂ ಮಾನವ ಸಂಪನ್ಮೂಲ ಒದಗಿಸುವುದು.<br>• ಕೋವಿಡ್-19 3ನೇ ಅಲೆಯ ನಿರ್ವಹಣೆಗಾಗಿ ಸಿವಿಲ್ ಕಾಮಗಾರಿಗಳು ಹಾಗೂ ಉಪಕರಣಗಳ ಖರೀದಿ ಸೇರಿದಂತೆ ಒಟ್ಟು ರೂ.876.00 ಕೋಟಿಗಳಿಗೆ ಆರ್ಥಿಕ ಇಲಾಖೆಯಿಂದ ಅನುಮೋದನೆ ಪಡೆಯಲಾಗಿದೆ.<br><br>**ಇಲಾಖೆಯಲ್ಲಿ ಖಾಲಿಯಿರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ತಜ್ಞ ವೈದ್ಯರ ಹುದ್ದೆಯನ್ನು 2020-21ನೇ ಸಾಲಿನ ವಿಶೇಷ ನೇರ ನೇಮಕಾತಿ ಸಮಿತಿ ಮೂಲಕ ಈ ಕೆಳಕಂಡಂತೆ ಭರ್ತಿ ಮಾಡಲಾಗಿದೆ.**<br><br>• 2020-21ನೇ ಸಾಲಿನ ವಿಶೇಷ ನೇರನೇಮಕಾತಿಯಡಿಯಲ್ಲಿ 1,048 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ 692 ತಜ್ಞ ವೈದ್ಯರುಗಳ ನೇಮಕಾತಿ ಆದೇಶ ಹೊರಡಿಸಿದ್ದು, ಅದರ ಪೈಕಿ 832 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ 335 ತಜ್ಞ ವೈದ್ಯರುಗಳು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಉಳಿದ ಖಾಲಿ ಹುದ್ದೆಗಳಿಗೆ ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಹೊರಡಿಸಲಾಗಿರುತ್ತದೆ.<br>• 2021ನೇ ಸಾಲಿನಲ್ಲಿ ಎಂ.ಬಿ.ಬಿ.ಎಸ್ ಪದವಿ ಪೂರೈಸಿದ 2,050 ವೈದ್ಯ ಅಭ್ಯರ್ಥಿಗಳನ್ನು 01 ವರ್ಷದ ಕಡ್ಡಾಯ ಸೇವೆಗಾಗಿ ಸ್ಥಳ ನಿಯುಕ್ತಿಗೊಳಿಸಲಾಗಿದ್ದು, ಈ ಪೈಕಿ 1731 ವೈದ್ಯರು ಕರ್ತವ್ಯಕ್ಕೆ ಹಾಜರಾಗಿ ಸೇವೆ ಸಲ್ಲಿಸುತ್ತಿದ್ದಾರೆ.<br>• ಸೇವಾನಿರತ ಸ್ನಾತಕೋತ್ತರ (RGUHS/DNB/CPS/MPH) ವ್ಯಾಸಂಗ ಪೂರೈಸಿ ಬರುವ ತಜ್ಞ ವೈದ್ಯರನ್ನು ಖಾಲಿಯಿರುವ ಹುದ್ದೆಗಳಿಗೆ ನೇಮಿಸಲಾಗುವುದು. |

| | | |
|---|---|---|
| | | • ಎಂ.ಬಿ.ಬಿ.ಎಸ್ ಪದವಿ ಪೂರೈಸಿದ ಮತ್ತು ಸ್ನಾತಕೋತ್ತರ ಪದವಿ ಪೂರೈಸಿದ ವೈದ್ಯ ಅಭ್ಯರ್ಥಿಗಳನ್ನು 1 ವರ್ಷದ ಕಡ್ಡಾಯ ಸರ್ಕಾರಿ ಸೇವೆಗೆ ನೇಮಿಸುವ ಮೂಲಕ ವೈದ್ಯರ ಕೊರತೆಯನ್ನು ನೀಗಿಸಲು ಕ್ರಮ ಕೈಗೊಳ್ಳಲಾಗುವುದು.<br>▪ ಇದಲ್ಲದೇ, ಒಟ್ಟಾರೆ ಕೋವಿಡ್-19 ನಿರ್ವಹಣೆಗಾಗಿ ಹೊರಗುತ್ತಿಗೆ ಅಡಿಯಲ್ಲಿ 4,961 ಮಂದಿ ಅಧಿಕಾರಿ / ಸಿಬ್ಬಂದಿ ಯವರು ತಾತ್ಕಾಲಿಕವಾಗಿ ನೇಮಿಸಿ ಕಾರ್ಯನಿರ್ವಹಿಸುತ್ತಿರುತ್ತಾರೆ. |

**ಆಕುಕ 140 ಎಸ್ಎಂಎಂ 2021**

(ಡಾ॥ ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು.